# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಜುಲೈ ೧೪, ೨೦೧೬ (ಆಷಾಢ ೨೩, ಶಕ ವರ್ಷ ೧೯೩೮)<br>Bengaluru, Thursday, July 14, 2016 (Ashadha 23, Shaka Varsha 1938) | ಸಂಚಿಕೆ ೨೮<br>Issue 28 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ :** ಶ್ರೀ ಜಿ.ಎನ್.ಬಸವರಾಜು, ಕೆ.ಎ.ಎಸ್ (ಕಿ.ಶ್ರೇ) ಅಧಿಕಾರಿ ಇವರಿಗೆ ತಹಶೀಲ್ದಾರ್ ಗ್ರೇಡ್–1 ವೃಂದದಲ್ಲಿ ನೀಡಿರುವ ಅರ್ಹತಾ ದಿನಾಂಕಕ್ಕೆ ಅನ್ವಯಿಸಿ ಜೇಷ್ಠತೆಯನ್ನು ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ :**
1. ಅಧಿಸೂಚನೆ ಸಂ: ಕಂಇ 253 ಎಎಸ್‌ಡಿ 2008, ದಿ:31.05.2011.
2. ಅಧಿಸೂಚನೆ ಸಂ: ಕಂಇ 296 ಎಎಸ್‌ಡಿ 2011, ದಿ:02.01.2015.
3. ಶ್ರೀ ಜಿ.ಎನ್.ಬಸವರಾಜು, ಕೆ.ಎ.ಎಸ್ (ಕಿ.ಶ್ರೇ) ಅಧಿಕಾರಿ ಇವರ ಮನವಿ ದಿ:09.07.2015.

**ಪ್ರಸ್ತಾವನೆ:**

ಶ್ರೀ ಜಿ.ಎನ್.ಬಸವರಾಜು, ಕೆ.ಎ.ಎಸ್ (ಕಿ.ಶ್ರೇ) ಅಧಿಕಾರಿ, ಇವರು ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿದ್ದು, ಸದರಿಯವರು ಕಂದಾಯ ಇಲಾಖೆಯ ತಹಶೀಲ್ದಾರ್ ಗ್ರೇಡ್–2 ವೃಂದಕ್ಕೆ ಬಡ್ತಿ ಹೊಂದಿ ನಂತರ ತಹಶೀಲ್ದಾರ್ ಗ್ರೇಡ್–1 ಮತ್ತು ಕೆ.ಎ.ಎಸ್ (ಕಿ.ಶ್ರೇ) ವೃಂದಕ್ಕೆ ಬಡ್ತಿ ಹೊಂದಿ ಕಾರ್ಯನಿರ್ವಹಿಸುತ್ತಿದ್ದಾರೆ. ಸದರಿ ಅಧಿಕಾರಿಯವರು ದಿ:09.07.2015ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿ ಶ್ರೀ ಹೆಚ್.ಪಿ.ನಾಗರಾಜ್ ಇವರೂ ಸಹ ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿದ್ದು, ತಹಶೀಲ್ದಾರ್ ಗ್ರೇಡ್–2 ವೃಂದಕ್ಕೆ ಇಬ್ಬರು ಅಧಿಕಾರಿಗಳು ಒಂದೇ ಅಧಿಸೂಚನೆಯಲ್ಲಿ ಬಡ್ತಿ ಹೊಂದಿದ್ದರೂ ಸಹ ತಹಶೀಲ್ದಾರ್ ಗ್ರೇಡ್–1 ವೃಂದದಲ್ಲಿ ಶ್ರೀ ಹೆಚ್.ಪಿ.ನಾಗರಾಜ್ ಇವರಿಗೆ ಸೂಕ್ತವಾಗಿ ಜೇಷ್ಠತೆಯನ್ನು ನಿಗಧಿಪಡಿಸಲಾಗಿರುತ್ತದೆ. ಆದರೆ, ತಹಶೀಲ್ದಾರ್ ಗ್ರೇಡ್–1 ವೃಂದದ ಜೇಷ್ಠತಾ ಪಟ್ಟಿಯಲ್ಲಿ ಅರ್ಹತಾ ದಿನಾಂಕಕ್ಕೆ ಅನ್ವಯಿಸಿ ಜೇಷ್ಠತಾ ಕ್ರಮ ಸಂಖ್ಯೆಯನ್ನು ಪುನರ್ ನಿಗಧಿಗೊಳಿಸದೆ ಇರುವ ಕಾರಣದಿಂದಾಗಿ ಅನ್ಯಾಯವಾಗಿರುವುದನ್ನು ಮನವಿಯಲ್ಲಿ ತಿಳಿಸುತ್ತಾ, ಜೇಷ್ಠತಾ ಕ್ರಮ ಸಂಖ್ಯೆಯನ್ನು ಸರಿಯಾದ ಸ್ಥಾನದಲ್ಲಿ ನಿಗಧಿಪಡಿಸುವಂತೆ ಕೋರಿರುತ್ತಾರೆ.

ಅಧಿಸೂಚನೆ ಸಂ: ಕಂಇ 38 ಎಟಿಎಸ್ 1992(II), ದಿ:25.09.1992ರಲ್ಲಿ ರೂ.1900–3650ರ ವೇತನ ಶ್ರೇಣಿಯಲ್ಲಿ ತಾತ್ಕಾಲಿಕವಾಗಿ ತಹಶೀಲ್ದಾರ್ ವೃಂದಕ್ಕೆ ಬಡ್ತಿ ನೀಡಲಾಗಿದೆ. ಈ ಆದೇಶದಲ್ಲಿ ಶ್ರೀ ಹೆಚ್.ಪಿ.ನಾಗರಾಜ್ ಇವರ ಕ್ರ.ಸಂ:78 ಹಾಗೂ ಶ್ರೀ ಜಿ.ಎನ್.ಬಸವರಾಜು ಇವರ ಕ್ರ.ಸಂ:79 ಆಗಿರುತ್ತದೆ.

ಶ್ರೀ ಹೆಚ್.ಪಿ.ನಾಗರಾಜ್, ಇವರಿಗೆ ಮಾನ್ಯ ಕೆ.ಎ.ಟಿ ತೀರ್ಪಿನ ಮೇರೆಗೆ ಸರ್ಕಾರದ ಆದೇಶ ಸಂ: ಕಂಇ 655 ಎಎಸ್‌ಡಿ 2012, ದಿ:20.01.2014ರಲ್ಲಿ ಶಿರಸ್ತೇದಾರ್ ವೃಂದದಲ್ಲಿ ಪರಿಶಿಷ್ಟ ಪಂಗಡದ ಮೀಸಲಾತಿಯನ್ನು ಅನ್ವಯಿಸಿ ತಹಶೀಲ್ದಾರ್ ಗ್ರೇಡ್–1 ವೃಂದದಲ್ಲಿ ಅರ್ಹತಾ ದಿನಾಂಕ:22.07.1992 ಎಂದು ನೀಡಲಾಗಿದೆ. ಇದೇ ಅರ್ಹತಾ ದಿನಾಂಕವನ್ನು ಶ್ರೀ ಜಿ.ಎನ್.ಬಸವರಾಜು ಇವರಿಗೆ ನೀಡಲು ಬರುವುದಿಲ್ಲವಾದ ಕಾರಣ, ಪರಿಶಿಷ್ಟ ಪಂಗಡಕ್ಕೆ ಮೀಸಲಾತಿಯನ್ವಯ ಪ್ರತಿ ರೋಸ್ಟರ್‌ನಲ್ಲಿ 2ನೇ ಬಿಂದುವಿಗೆ ಮಾತ್ರ ನೀಡಲು ಹಾಗೂ ಜೇಷ್ಠತೆಯ ಆಧಾರದ ಮೇಲೆ ಸಾಮಾನ್ಯ ವರ್ಗದಲ್ಲಿ ಪರಿಗಣಿಸಿ ಜೇಷ್ಠತೆಯನ್ನು ನಿಗಧಿಪಡಿಸಲು ಅವಕಾಶವಿರುತ್ತದೆ.

ಶ್ರೀ ಜಿ.ಎನ್.ಬಸವರಾಜು, ಇವರಿಗೆ ಅಧಿಸೂಚನೆ ಸಂ: ಕಂಇ 289 ಎಎಸ್‌ಡಿ 2009, ದಿ:29.4.2010ರಲ್ಲಿ ದಿ:24.12.2007ರಿಂದ ಜಾರಿಗೆ ಬರುವಂತೆ ತಹಶೀಲ್ದಾರ್ ಗ್ರೇಡ್–2 ವೃಂದದಿಂದ ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಬಡ್ತಿ ನೀಡಲಾಗಿದೆ.

ತಹಶೀಲ್ದಾರ್ ಗ್ರೇಡ್–1 ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಅಧಿಸೂಚನೆ ಸಂ:ಕಂಇ 296 ಎಎಸ್‌ಡಿ 2011, ದಿ:22.07.2011ರಲ್ಲಿ ಪ್ರಕಟಿಸಲಾಗಿದ್ದು ಈ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಜಿ.ಎನ್.ಬಸವರಾಜು ಇವರಿಗೆ ನಿಗಧಿಪಡಿಸಿರುವ ಜೇಷ್ಠತೆಯು ಈ ಕೆಳಕಂಡಂತೆ ಇರುತ್ತದೆ:–

| ತಹಶೀಲ್ದಾರ್ ಗ್ರೇಡ್–1 ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿನ ಜೇಷ್ಠತಾ ಕ್ರಸಂ | ಹಿಂದಿನ ಜೇಷ್ಠತಾ ಪಟ್ಟಿಯ ಕ್ರಸಂ | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ತಹಶೀಲ್ದಾರ್ ಗ್ರೇಡ್–2 ವೃಂದದಲ್ಲಿಯ ಅರ್ಹತಾ ದಿನಾಂಕ | ತಹಶೀಲ್ದಾರ್ ಗ್ರೇಡ್–1 ವೃಂದದಲ್ಲಿಯ ಅರ್ಹತಾ ದಿನಾಂಕ | ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಬಡ್ತಿ ನೀಡಲಾದ ವಾಸ್ತವಿಕ ದಿನಾಂಕ | ಷರಾ |
|---|---|---|---|---|---|---|---|
| 558 | -- | ಶ್ರೀ ಬಸವರಾಜು ಜಿ.ಎನ್(ಎಸ್.ಟಿ) | 01.05.1957 | 25.09.1992 | 25.09.1995 | 24.12.2007 | -- |

ಮುಂದುವರೆದು, ತಹಶೀಲ್ದಾರ್ ಗ್ರೇಡ್–1 ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಅಧಿಸೂಚನೆ ಸಂ: ಕಂಇ 296 ಎಎಸ್‌ಡಿ 2011, ದಿ:02.01.2015ರಲ್ಲಿ ಪ್ರಕಟಿಸಲಾಗಿದ್ದು, ಅದರಲ್ಲಿ ಶ್ರೀ ಜಿ.ಎನ್.ಬಸವರಾಜು ಇವರಿಗೆ ನಿಗಧಿಪಡಿಸಿರುವ ಜೇಷ್ಠತೆ ಹಾಗೂ ಅರ್ಹತಾ ದಿನಾಂಕವು ಕೆಳಕಂಡಂತೆ ಇರುತ್ತದೆ:–

| ತಹಶೀಲ್ದಾರ್ ಗ್ರೇಡ್–1 ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿನ ಜೇಷ್ಠತಾ ಕ್ರಸಂ | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ತಹಶೀಲ್ದಾರ್ ಗ್ರೇಡ್–1 ವೃಂದದಲ್ಲಿಯ ಅರ್ಹತಾ ದಿನಾಂಕ | ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಬಡ್ತಿ ಮಾಡಲಾದ ವಾಸ್ತವಿಕ ದಿನಾಂಕ | ಷರಾ |
|---|---|---|---|---|---|
| 565 | ಶ್ರೀ ಬಸವರಾಜು ಜಿ.ಎನ್(ಎಸ್.ಟಿ) | 01.05.1957 | 25.09.1995 | 24.12.2007 | -- |

ಶ್ರೀ ಜಿ.ಎನ್.ಬಸವರಾಜು ಇವರಿಗೆ ತಹಶೀಲ್ದಾರ್ ಗ್ರೇಡ್–1 ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಅರ್ಹತಾ ದಿನಾಂಕ:25.09.1995ನ್ನು ನೀಡಲಾಗಿದೆ. ಈ ಅರ್ಹತಾ ದಿನಾಂಕಕ್ಕೆ ಅನ್ವಯಿಸಿ ಇವರ ಜೇಷ್ಠತೆಯನ್ನು ಕೆಳಕಂಡ ಇಬ್ಬರು ಅಧಿಕಾರಿಗಳ ಮಧ್ಯದಲ್ಲಿ ಜೇಷ್ಠತಾ ಕ್ರ.ಸಂ:375ಎ ಗೆ ನಿಗಧಿಪಡಿಸಲು ಅರ್ಹರಾಗಿರುತ್ತಾರೆ. ಜೇಷ್ಠತಾ ಪಟ್ಟಿಯನ್ನು ತಯಾರಿಸುವಾಗ ಅರ್ಹತಾ ದಿನಾಂಕಕ್ಕೆ ಅನ್ವಯಿಸಿ ಜೇಷ್ಠತಾ ಕ್ರಮ ಸಂಖ್ಯೆಯನ್ನು ನಿಗಧಿಪಡಿಸದೆ ಇರುವುದನ್ನು ಗಮನಿಸಲಾಗಿದೆ.

| ತಹಶೀಲ್ದಾರ್ ಗ್ರೇಡ್–1 ವೃಂದದ ಅಂತಿಮಜೇಷ್ಠತಾ ಪಟ್ಟಿಯಲ್ಲಿನ ಜೇಷ್ಠತಾ ಕ್ರಸಂ | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ತಹಶೀಲ್ದಾರ್ ಗ್ರೇಡ್–1 ವೃಂದದಲ್ಲಿನ ಅರ್ಹತಾ ದಿನಾಂಕ | ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಬಡ್ತಿ ಮಾಡಲಾದ ವಾಸ್ತವಿಕ ದಿನಾಂಕ | ಷರಾ |
|---|---|---|---|---|---|
| 375 | ಶ್ರೀ ಎಸ್.ಟಿ.ಸ್ವಾದಿ | 07.02.1942 | 18.08.1995 | – | – |
| **375 ಎ** | ಶ್ರೀ ಬಸವರಾಜು ಜಿ.ಎನ್(ಎಸ್.ಟಿ) | **01.05.1957** | **25.09.1995** | **24.12.2007** | **565 - ತಹಶೀಲ್ದಾರ್ ಗ್ರೇಡ್–1 ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ನಮೂದಾಗಿರುವ ಜೇಷ್ಠತಾ ಕ್ರ.ಸಂ:565** |
| 376 | ಶ್ರೀ ಆರ್.ಎಸ್.ದೇಶಪಾಂಡೆ | 04.08.1941 | 30.09.1995 | 30.09.1995 | |

ಆದ್ದರಿಂದ, ಶ್ರೀ ಜಿ.ಎನ್.ಬಸವರಾಜು, ಕೆ.ಎ.ಎಸ್ (ಕಿ.ಶ್ರೇ) ಅಧಿಕಾರಿ, ಇವರಿಗೆ ತಹಶೀಲ್ದಾರ್ ಗ್ರೇಡ್–1 ವೃಂದದಲ್ಲಿ ನೀಡಿರುವ ಅರ್ಹತಾ ದಿನಾಂಕವನ್ನು ಆಧರಿಸಿ ಜೇಷ್ಠತಾ ಕ್ರಮ ಸಂಖ್ಯೆಯನ್ನು ಪುನರ್ ನಿಗಧಿಪಡಿಸಲು ಸರ್ಕಾರವು ನಿರ್ಣಯಿಸಿ, ಅದರಂತೆ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 520 ಎಎಸ್‌ಡಿ 2015, ಬೆಂಗಳೂರು, ದಿನಾಂಕ: 16.02.2016**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಎನ್.ಬಸವರಾಜು, ಕೆ.ಎ.ಎಸ್ (ಕಿ.ಶ್ರೇ) ಅಧಿಕಾರಿ, ಇವರಿಗೆ ತಹಶೀಲ್ದಾರ್ ಗ್ರೇಡ್–1 ವೃಂದದಲ್ಲಿ ನೀಡಿರುವ ಅರ್ಹತಾ ದಿನಾಂಕವನ್ನು ಆಧರಿಸಿ ಸದರಿಯವರಿಗೆ ಅಧಿಸೂಚನೆ ಸಂ: ಕಂಇ 296 ಎಎಸ್‌ಡಿ 2011, ದಿ:02.01.2015ರಲ್ಲಿ ಪ್ರಕಟಿಸಲಾದ ತಹಶೀಲ್ದಾರ್ ಗ್ರೇಡ್–1 ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿರುವ **ಜೇಷ್ಠತಾ ಕ್ರ.ಸಂ:565ಕ್ಕೆ** ಬದಲಾಗಿ **ಜೇಷ್ಠತಾ ಕ್ರ.ಸಂ:375ಎ** (ಶ್ರೀ ಎಸ್.ಟಿ.ಸ್ವಾದಿ: ಜೇಷ್ಠತಾ ಕ್ರ.ಸಂ;375 ಹಾಗೂ ಶ್ರೀ ಆರ್.ಎಸ್.ದೇಶಪಾಂಡೆ ಜೇಷ್ಠತಾ ಕ್ರ.ಸಂ:376 ಇವರುಗಳ ಮಧ್ಯದಲ್ಲಿ) ಗೆ ಪುನರ್ ನಿಗಧಿಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ.ಶ್ರೀಪಾದರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ [ಸೇ–3 & ವಿ.ನಿ]

**P.R. 437**
**SC - 50**

## COMMERCE AND INDUSTRIES SECRETARIAT

**Sub :** Project Proposal of M/s BMM Ispat Ltd., - to establish a unit for manufacture of "2 MTPA Integrated Steel Plant and Slag Based Cement with 300 MW Power Plant" at Danapura, Nagalapura, D.N. Kere, Bylakundi and Garaga Villages, Marriyammanahalli Hobli, Hospet Taluk, Ballari District - Extension of time - Reg.

**Read :**
1. Proceedings of the $15^{th}$ State High Level Clearance Committee (SHLCC) meeting held on 21-08-2008.
2. Government Order No. CI 312 SPI 2008, dated : 21.10.2008.
3. Proceedings of the $33^{rd}$ State High Level Clearance Committee (SHLCC) meeting held on 19-11-2013.
4. Government Order No. CI 27 SPI 2011, dated : 13.01.2014.
5. Proceedings of the $24^{th}$ Land Audit Committee (LAC) meeting held on 19.01.2016.
6. Proceedings of the $43^{rd}$ State High Level Clearance Committee (SHLCC) meeting held on 01.02.2016.

**Preamble :**

The Proposal of M/s BMM Ispat Ltd, to establish a unit for manufacture of "2 MTPA Integrated Steel Plant and Slag Based Cement Plant with 300 MW Power Plant" at Danapura, Nagalapura, D.N. Kere, Bylakundi and Garaga Villages, Marriyammanahalli Hobli, Hospet Taluk, Ballari District with an investment of ₹. 6151 crore, was approved in the $15^{th}$ SHLCC meeting held on 21.08.2008. The Government Order was issued vide Government Order No. CI 312 SPI 2008, dated : 21.10.2008 read at (2) above.

Further. $33^{rd}$ SHLCC in its meeting held on 19.11.2013 accorded approval for extension of time to implement the project for further period of three years from 13.01.20l4. Accordingly Government Order No. CI 27 SPI 2011. dated: 13.01.2014 cited at read (4) was issued.

Now the company vide its letter dated : 08.01.2016 has informed that, they have commissioned the following facilities which are part of the integrated steel plant with an investment of ₹. 4000 Crores up to September 2015.

| Sl.No. | Description | Capacity |
|---|---|---|
| 1. | Iron Ore Beneficiation Unit | 1.30 MTPA |
| 2. | Pelletization Unit | 1.20 MTPA |
| 3. | DR Plant (Sponge Iron Plant) | 0.70 MTPA |
| 4. | Power Plant | 70 MW |
| 5. | Power Plant (70x2) | 140 MW |
| 6. | SMS (Bellet & Rounds) | 1.10 MTPA |
| 7. | Rolling Mill | 0.85 MTPA |
| 8. | Oxygen Plant | 500 TPD |

They have further informed that due to the following constrains they were unable to implement the entire "3 MTPA Integrated Steel Plant" within time schedule :

- Environment Clearance from MOEF, New Delhi was granted in 2010.
- Patta land was taken possession and allotted by KIADB in July, 2012.
- Government land was allotted and possession taken in September, 2014.
- Legal case at Hon'ble High Court regarding acquisition.
- Recession prevailing in the Steel Sector and the uncertainty of availability of Iron Ore.

In view of the above, they have requested to extend the time for implementation of the project by 3 years.

The proposal of the company has been placed before the $24^{th}$ LAC meeting held on 19-01-2016. The decision of the LAC is as follows :

The representatives of the company explained the status of implementation of project to the committee. They have informed that, they have so far commissioned Beneficiation and Pallet Plant, Sponge Iron plant, Power Plant, Billet and Rolling Mill and Oxygen Plant, which are part of the Integrated Steel Plant, investing around ₹. 4000 crores and due to the constrains in allotment of land and court cases, the project implementation is not completed and requested for extension of time by 3 years to implement the project.

The Committee noted the above and after detailed discussion, informed MD, KUM to send a proposal to Commerce & Industries Department for grant of 3 years of extension of time to implement the project as decided in $22^{nd}$ LAC meeting at Sub No. 3.5.

The proposal was examined in the $43^{rd}$ State High Level Clearance Committee (SHLCC) meeting held on 01-02-2016. Government has examined the recommendations made by the State High Level Clearance Committee, in all aspects.

Hence the following order.

**GOVERNMENT ORDER No. CI 187 SPI 2015, BENGALURU, DATED : 09.03.2016**

The Government is pleased to grant extension of time to M/s BMM Ispat Ltd., to implement the project approved vide Government Order No. CI 312 SPI 2008, dated : 21-10-2008 for further period of two years from the date of issue of this order.

All other terms and conditions indicated in the Government Order dated : 21.10.2008 read at (2) above, remain unaltered.

**P.R. 292**
**S.C. 25**

By Order and in the name of the Governor of Karnataka,
**S.Umadevi,**
Desk Officer (Technical Cell),
Commerce & Industries Department.

## COMMERCE & INDUSTRIES SECRETARIAT

**Sub:** Approval for the proposal of additional investment and enhancement of production of "7500 TCD- Sugar Plant, 12 MW Co-gen Plant and 30 KLPD Ethanol Plant" by M/s Shivshakthi Sugars Ltd., at Soundatti, Yadrav Post, Raibagh Taluk, Belagavi Distict- Reg.

**Read:**
1) Proceedings of the 8th State High Level Clearance Committee (SHLCC) meeting held on 23.02.2007.
2) Government Order No. CI 176 SPI 2007, dated: 07.11.2007.
3) Proceedings of the 27th State High Level Clearance Committee (SHLCC) meeting held on 13.04.2012.
4) Government Order No. CI 133 SPI 2012, dated: 21.04.2012.
5) Proceedings of the 38th State High Level Clearance Committee (SHLCC) meeting held on 17.06.2015.

**Preamble:**

The project proposal of M/s Shivshakthi Sugars Ltd., was approved in 8th SHLCC meeting held on 23.02.2007 to establish "3000 TCD Sugar Plant, 12MW Co-Gen Plant and 30 KLPD Ethanol Plant" with an investment of ₹.106.849 Crores in 77 acres 25 guntas of land at Soundatti, Yadrav Post, Raibagh Taluk, Belagavi District.

The company further expanded the production capacity of Sugar Plant from "3000 TCD to. 7500 TCD, Co-Gen from 12 MW to 45 MW and Ethanol Plant from 30 KLPD to 120 KLPD" which was approved in 27th SHLCC meeting held on 13.04.2012 and Government Order was issued vide No. CI 133 SPI 2012, dated 21.4.2012 and Corrigendum on 24.7.2012.

The company has informed that due to market demand and availability of cane in the reserved area, the company has planned to expand the Sugar Plant capacity from "7500 TCD to 10,000 TCD and Co-Gen Plant from 45 MW to 60 MW" and requested SHLCC to approve the Sugar Plant capacity to be increased from 7500 TCD to 10,000 TCD and Co-generation of power from 45 to 60 MW with an investment of ₹.367.47 Crores in existing land. The subject was discussed in 37th SHLCC meeting held on 27.3.2015. The Committee after detailed discussions directed to examine the proposal and to submit on file for approval to Hon'ble Chief Minister and Chairman of SHLCC.

The company has taken IEM from GOI for enhanced capacity vide No. 3078/SIA/IMO/2006, dated 08.06.2006 and 12.05.2015.

Subsequently, the subject was discussed in 18th Land Audit Committee held on 22.5.2015 and decided to obtain opinion of the Commissioner, Cane. Development on availability of sugarcane to meet the additional requirement envisaged in the expansion plan before submitting the file for approval.

Cane Commissioner vide its letter NO.DSK/DEV/3/2015-16, dated 26.05.2015 has recommended to consider the expansion of crushing capacity of M/s Shivshakthi Sugars Ltd, from 7500 TCD to 10,000 TCD with a condition that they should procure the required cane for their expanded capacity by developing cane area from their allotted reserved area only.

Commissioner for Cane Development and Director of Sugar was requested to furnish the following details:

(a) Payment of arrears to farmers

(b) Availability of Cane for the expansion proposal of the company.

The Commissioner for Cane Development & Director of Sugars, who was present in the meeting, informed that the company has been requested to develop cane in the area allotted to them.

In the 38th State High Level Clearance Committee (SHLCC) Meeting held on 17.06.2015, the proposal of the Company was discussed and conditionally approved the project subject to the payment of cane arrears to the farmers by the company.

Commissioner for Cane Development has certified that M/s Shivshakthi Sugars Ltd.Belagavi District has cleared the arrears of Sugar Cane growers vide his letter dated 06.11.2015.

Government has examined the recommendations made by the State High Level Clearances Committee in the 38th Meeting held on 17.06.2015, in all aspects.

Hence the following order.

**GOVERNMENT ORDER NO. CI 133 SPI 2012, BENGALURU, DATED 19.01.2016.**

Government is pleased to accord approval for the following proposals of M/s Shivshakthi Sugars Ltd., Soundatti, Yadrav Post, Raibagh Taluk, Belagavi District :

- To expand the crushing capacity from 7500 TCD to 10000 TCD.
- To expand Co-Gen plant capacity from 45 MW to 60 MW.
- To invest additional amount of ₹. 367.47 crores in the existing land.
- To undertake expansion by procuring the required cane by developing Cane area from their allotted reserved area only.

Company to encourage and participate for adoption of drip irrigation system by cane growers in allotted Cane Zone.

All other terms and conditions indicated in the Government Orders No. CI 176 SPI 2007, dated: 07.11.2007 and No.CI 133 SPI 2012, dated 21.04.2012 read at (1) & (4) above, remain unaltered.

By Order and in the name of the Governor of Karnataka

**PR. 176**
**SC. 25**

**S. UMADEVI**
Dest Officer (Technical Cell),
Commerce & Industries Department.

## ಕಂದಾಯ ಸಚಿವಾಲಯ

**ವಿಷಯ :** ಉತ್ತರ ಕನ್ನಡ ಜಿಲ್ಲೆಯ ಭಟ್ಕಳ ತಾಲ್ಲೂಕಿನ ಸೂಸಗಡಿ ಗ್ರಾಮದ ಸ.ನಂ. 352/ಅ1ಅ ರಲ್ಲಿ ಕ್ಷೇತ್ರ 0–10–0 ಎಕರೆ ಜಮೀನನ್ನು ಗ್ರಾಮೀಣ ವ್ಯವಸಾಯ ಸೇವಾ ಸಹಕಾರಿ ಸಂಘ, ಬೆಳಕೆ, ಭಟ್ಕಳ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇವರಿಗೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ :** ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಪತ್ರ ಸಂ:ಪ್ರಾಆಬೆ:ಭೂಮಿ:4:ಎಲ್.ಜಿ.ಎಲ್:60/2011–12, ದಿನಾಂಕ:28–03–2012.

**ಪ್ರಸ್ತಾವನೆ :**

ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಮೇಲೆ ಓದಲಾದ ಪತ್ರದಲ್ಲಿ ಉತ್ತರ ಕನ್ನಡ ಜಿಲ್ಲೆಯ ಭಟ್ಕಳ ತಾಲ್ಲೂಕಿನ ಸೂಸಗಡಿ ಗ್ರಾಮದ ಸ.ನಂ. 352/ಅ1ಅ ರಲ್ಲಿ ಕ್ಷೇತ್ರ 0–10–0 ಎಕರೆ ಜಮೀನನ್ನು ಗ್ರಾಮೀಣ ವ್ಯವಸಾಯ ಸೇವಾ ಸಹಕಾರಿ ಸಂಘಕ್ಕೆ ಮಂಜೂರು ಮಾಡುವ ಬಗ್ಗೆ ಶಿಫಾರಸ್ಸಿನೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಾದೇಶಿಕ ಆಯುಕ್ತರು ಇವರು ತಮ್ಮ ವರದಿಯಲ್ಲಿ ಸದರಿ ಸ.ನಂ. ರಲ್ಲಿ ಪೂರ್ತಿ ಕ್ಷೇತ್ರ 485–26–0 ಇದ್ದು ಅದರಲ್ಲಿ 0–10–0 ಗುಂಟೆ ಸಂಘಕ್ಕೆ ಡಿವಿಷನಲ್ ಫಾರೆಸ್ಟ್ ಆಫೀಸರ್, ಹೊನ್ನಾವರ ಇವರ ಆದೇಶ ಸಂಖ್ಯೆ:ಎಫ್.ಒ.ಪಿ/ಜಿ.ಎಲ್.ಎಲ್/4/1971–72, ದಿನಾಂಕ: 24–11–1971 ರಲ್ಲಿನ ಆದೇಶದಲ್ಲಿ ಬೆಳಕೆ ಗ್ರಾಮದ ಅರಣ್ಯದ ಸ.ನಂ.352/ಅ1ಅ ಪೈಕಿ 0–10–0 ಗುಂಟೆ ಜಮೀನನ್ನು ಗ್ರಾಮೀಣ ವ್ಯವಸಾಯ ಸೇವಾ ಸಹಕಾರಿ ಸಂಘ, ಬೆಳಕೆ, ಭಟ್ಕಳ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇವರಿಗೆ ನೀಡಿದ್ದು, ಸದರಿ ಜಮೀನು ಕುರಿತಂತೆ ಹಕ್ಕು ಮತ್ತು ಪಹಣಿ ಕಲಂ ಸಂಖ್ಯೆ 11ರಲ್ಲಿ ದಾಖಲಿದ್ದು ಪಹಣಿ ಕಲಂ ಸಂಖ್ಯೆ 9 ರಲ್ಲಿ ಸರ್ಕಾರ ಎಂದು ದಾಖಲಾಗಿದ್ದು, ಆದರೆ ಜಮೀನು ಅರ್ಜಿದಾರರಿಗೆ ಖಾಯಂ ಮಂಜೂರು ಆಗಿರುವುದಿಲ್ಲ, ಅದರಿಂದ ಮಂಜೂರಾತಿ ಕುರಿತು ಪ್ರಾದೇಶಿಕ ಆಯುಕ್ತರು ಕೋರಿರುವ 0–10–0 ಗುಂಟೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳ, 1969 ನಿಯಮ 20(1)(ಸಿ) ರನ್ವಯ ಸಹಕಾರ ಸಂಘಗಳು, ಸ್ಥಳೀಯ ಸಂಸ್ಥೆಗಳು ಅಂದರೆ ಕೆ.ಎಸ್.ಆರ್.ಟಿ.ಸಿ., ಕೆ.ಪಿ.ಟಿ.ಸಿ.ಎಲ್ ಸಂಸ್ಥೆಗಳಿಗೆ ಮಾರುಕಟ್ಟೆ ಬೆಲೆಯ ಶೇಕಡಾ 50% ಹಣ ಸರ್ಕಾರಕ್ಕೆ ಪಾವತಿಸುವ ಷರತ್ತುಗೊಳಪಟ್ಟು ಮಂಜೂರು ಮಾಡುವಂತೆ; ಸದರಿ ಸಂಘಕ್ಕೂ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರದ ಆದೇಶ ಸಂಖ್ಯೆ ಆರ್‌ಡಿ 53 ಎಲ್‌ಜಿಎನ್ 2012, ದಿನಾಂಕ: 03.02.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉತ್ತರ ಕನ್ನಡ ಜಿಲ್ಲೆಯ ಭಟ್ಕಳ ತಾಲ್ಲೂಕಿನ ಸೂಸಗಡಿ ಗ್ರಾಮದ ಸ.ನಂ. 352/ಅ1ಅ ರಲ್ಲಿ ಕ್ಷೇತ್ರ 0–10–0 ಎಕರೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 20(1)(ಸಿ) ರನ್ವಯ ಮಾರುಕಟ್ಟೆ ಬೆಲೆಯ ಶೇಕಡಾ 50% ಪಾವತಿಸಿಕೊಂಡು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಗ್ರಾಮೀಣ ವ್ಯವಸಾಯ ಸೇವಾ ಸಹಕಾರಿ ಸಂಘ, ಬೆಳಕೆ, ಭಟ್ಕಳ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇವರಿಗೆ ಮಂಜೂರು ಮಾಡಲು ಅನುಮತಿ ನೀಡಲಾಗಿದೆ.

1) ಜಿಲ್ಲಾಧಿಕಾರಿಗಳು ಜಮೀನಿನ ಮಂಜೂರಾತಿ ಆದೇಶದಲ್ಲಿ ನಿಯಮಾನುಸಾರ ಪ್ರಸ್ತಾಪಿತ ಭೂಮಿಯ ಪ್ರಚಲಿತ ಮಾರುಕಟ್ಟೆ ದರ ಮತ್ತು ಇತರೆ ಶುಲ್ಕವನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.
2) ಮಂಜೂರಾದ ಜಮೀನಿಗೆ ಸಂಸ್ಥೆಯು ಮೂರು ತಿಂಗಳ ಒಳಗೆ ಹಣವನ್ನು ಪಾವತಿಸಿ ಉದ್ದೇಶಿತ ಕಾರ್ಯಕ್ರಮಕ್ಕೆ ಜಮೀನನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವುದು.
3) ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
4) ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದಲ್ಲ.
5) ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
6) ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

7) ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.

8) ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.

9) ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.

10) ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

11) ಮಂಜೂರದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

12) ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉದಯ ಆರ್. ನಾಯಕ್**
ಪೀಠಾಧಿಕಾರಿ,
ಕಂದಾಯ ಇಲಾಖೆ.(ಭೂ.ಮಂ–2)

**PR. 177**
**SC. 25**

## ಕಂದಾಯ ಸಚಿವಾಲಯ

**ವಿಷಯ :** ಮಂಡ್ಯ ತಾ॥, ಕೊತ್ತತ್ತಿ ಹೋಬಳಿ, ಚೀರನಹಳ್ಳಿ ಗ್ರಾಮದ ಸ.ನಂ.82/5 ರಲ್ಲಿ 0–12 ಗುಂಟೆ ಭೂ ಸ್ವಾಧೀನವಾಗಿರುವುದನ್ನು ಮಂಡ್ಯ ಪ್ರಿನ್ಸಿಪಲ್ ಮುಸ್ಸೀಪ್ ನ್ಯಾಯಾಲಯ ರದ್ದು ಪಡಿಸಿರುವುದರಿಂದ ಅದರ ಬದಲಾಗಿ ಇದೇ ಗ್ರಾಮದ ಸ.ನಂ.147 ರಲ್ಲಿ 0–07–08 ಗುಂಟೆ ಜಮೀನನ್ನು ನಿವೇಶನಕ್ಕಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿ, ಮಂಡ್ಯ ಜಿಲ್ಲೆ, ಮಂಡ್ಯ ಇವರ ಪತ್ರ ಸಂ:ಎಲ್‌ಎನ್‌ಡಿ(1)ಸಿಆರ್: 548/2014–15, ದಿನಾಂಕ:15–07–2015.

**ಪ್ರಸ್ತಾವನೆ :**

ಜಿಲ್ಲಾಧಿಕಾರಿ, ಮಂಡ್ಯ ಜಿಲ್ಲೆ, ಮಂಡ್ಯ ಇವರ ಮೇಲೆ ಓದಲಾದ ಪತ್ರದಲ್ಲಿ ಮಂಡ್ಯ ತಾ॥, ಕೊತ್ತತ್ತಿ ಹೋಬಳಿ, ಚೀರನಹಳ್ಳಿ ಗ್ರಾಮದ ಸ.ನಂ.82/5 ರಲ್ಲಿ 0–12 ಗುಂಟೆ ಜಮೀನನ್ನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರ ಗ್ರಾಮ ಬಡಾವಣೆಗಾಗಿ ಸ್ವಾಧೀನವಾಗಿರುವುದನ್ನು ಮಂಡ್ಯ ಪ್ರಿನ್ಸಿಪಲ್ ಮುಸ್ಸೀಫ್ ನ್ಯಾಯಾಲಯ ರದ್ದು ಪಡಿಸಿರುವುದರಿಂದ; ಅದರ ಬದಲಾಗಿ ಇದೇ ಗ್ರಾಮದ ಸ.ನಂ.147 ರಲ್ಲಿ 0–07–08 ಗುಂಟೆ ಸರ್ಕಾರಿ ಗೋಮಾಳ ಜಮೀನನ್ನು ನಿವೇಶನಕ್ಕಾಗಿ ಮಂಜೂರು ಮಾಡುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿ ತಮ್ಮ ವರದಿಯಲ್ಲಿ ಬದನಗುಪ್ಪೆ, ಮಂಡ್ಯ ತಾ॥, ಕೊತ್ತತ್ತಿ ಹೋಬಳಿ, ಚೀರನಹಳ್ಳಿ ಗ್ರಾಮದ ಸ.ನಂ.82/5 ರಲ್ಲಿ 0–12 ಗುಂಟೆ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಇವರ ಗ್ರಾಮ ಬಡಾವಣೆಗಾಗಿ ಭೂ ಸ್ವಾಧೀನ ಪಡಿಸಿಕೊಂಡಿದ್ದು; ಸದರಿ ಜಮೀನು ಕುರಿತಂತೆ ಭೂ ಮಾಲೀಕರಾದ ಶ್ರೀ ನೀಲೇಗೌಡ ಇವರು ಪ್ರಶ್ನಿಸಿದ ಮೇರೆಗೆ ಮಂಡ್ಯ ಪ್ರಿನ್ಸಿಪಲ್ ಮುನ್ಸೀಫ್ ನ್ಯಾಯಾಲಯದ ಅಸಲು ದಾವೆ ಸಂ.651/1974 ರ ಪ್ರಕರಣದಲ್ಲಿ ಭೂ ಸ್ವಾಧೀನವನ್ನು ರದ್ದುಪಡಿಸಿರುತ್ತಾರೆ. ಸದರಿ ಆದೇಶವನ್ನು ಪ್ರಶ್ನಿಸಿ ಜಿಲ್ಲಾ ಮತ್ತು ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿದ್ದು ಸಹ ಮೇಲ್ಮನವಿ ವಜಾಗೊಂಡಿರುತ್ತದೆ. ಅದರಿಂದ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರ ಗ್ರಾಮ ಬಡಾವಣೆಗಾಗಿ ಜಮೀನು ಲಭ್ಯವಾಗದೇ ನಿವೇಶನ ವಂಚಿತರಾಗಿರುತ್ತಾರೆ. ಆದಕಾರಣ ಬಡಾವಣೆಗಾಗಿ ಚೀರನಹಳ್ಳಿ ಗ್ರಾಮದಲ್ಲಿಯೇ ಸ.ನಂ.147 ರಲ್ಲಿ ಖಾಲಿ ಇರುವ 0–07–08 ಗುಂಟೆ ಜಮೀನನ್ನು ನಿವೇಶನಗಾಗಿ ಗುರುತಿಸಿದ್ದು ಸದರಿ ಸ.ನಂ ರಲ್ಲಿ ಆಕಾರ್‌ಬಂದ್ ನಂತೆ 94 ಎಕರೆ 12 ಗುಂಟೆ ಸರ್ಕಾರಿ ಗೋಮಾಳ ಜಮೀನಿದ್ದು ಆರ್.ಟಿ.ಸಿ ಪ್ರಕಾರ 44 ಎಕರೆ 21 ಗುಂಟೆಯಿದ್ದು ಉಳಿದ 49 ಎಕರೆ 31 ಗುಂಟೆ ಜಮೀನನ್ನು ವಿವಿಧ ದರಖಾಸ್ತು ಮೂಲಕ ವಿಲೇವಾರಿ ಆಗಿದ್ದು, ಯಾವುದೇ ದುರಸ್ಥಿಕಾರ್ಯ ನಡೆದಿರುವುದಿಲ್ಲ. ಮುಂದುವರೆದು ಉಪವಿಭಾಗಾಧಿಕಾರಿ ಸಲ್ಲಿಸಿರುವ ವರದಿ ಅನುಸರಿಸಿ ಜಿಲ್ಲಾಧಿಕಾರಿಯವರು ಮಂಡ್ಯ ತಾ॥, ಕೊತ್ತತ್ತಿ ಹೋಬಳಿ, ಚೀರನಹಳ್ಳಿ ಗ್ರಾಮದ ಸ.ನಂ.147 ರಲ್ಲಿ 0–07–08 ಗುಂಟೆ ಗೋಮಾಳ ಜಮೀನನ್ನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರ ಬಡಾವಣೆಗಾಗಿ ನಿವೇಶನ ಹಂಚಲು ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 35 ಎಲ್‌ಜಿವೈ 2015, ದಿನಾಂಕ: 21.01.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮಂಡ್ಯ ತಾಲ್ಲೂಕಿನ ಕೊತ್ತತ್ತಿ ಹೋಬಳಿಯ ಚೀರನಹಳ್ಳಿ ಗ್ರಾಮದ ಸ.ನಂ.147 ರಲ್ಲಿ 0–07–08 ಗುಂಟೆ ಗೋಮಾಳ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮ, 1966ರ ನಿಯಮ 97(4) ರಡಿಯಲ್ಲಿ ಗೋಮಾಳ ವಿಸ್ತೀರ್ಣವನ್ನು ತಗ್ಗಿಸಿ; ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ಕಲಂ 20(2) ರನ್ವಯ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರಿಗೆ ನಿವೇಶನ ಹಂಚಲು ಗ್ರಾಮ ಪಂಚಾಯತಿಗೆ ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉದಯ ಆರ್. ನಾಯಕ್,**
ಪೀಠಾಧಿಕಾರಿ,
ಕಂದಾಯ ಇಲಾಖೆ.(ಭೂ.ಮಂ–2)

**PR. 178**
**SC. 25**

**ಒಳಾಡಳಿತ ಸಚಿವಾಲಯ**

**ವಿಷಯ :** ಮಹಿಳೆ ಮತ್ತು ಮಕ್ಕಳ ಮೇಲಿನ ಶೋಷಣೆ, ದೌರ್ಜನ್ಯ, ಅತ್ಯಾಚಾರ ನಿಯಂತ್ರಿಸುವ ಮತ್ತು ವರದಿ ನೀಡುವ ಸಮಿತಿಯ ಅಧ್ಯಕ್ಷರ ಆಪ್ತ ಕಾರ್ಯದರ್ಶಿ ಹುದ್ದೆಗೆ ನೇಮಕಾತಿಯಾಗಿರುವ ಶ್ರೀ ಕೆ.ಜಯಶಂಕರಮೂರ್ತಿ, ಇವರ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಒಇ 160 ಸಿಐಡಿ 2014 (ಪಿ.7), ಬೆಂಗಳೂರು, ದಿನಾಂಕ: 13.11.2015.

**ಪ್ರಸ್ತಾವನೆ:–**

ಮೇಲೆ ಓದಲಾದ ಆದೇಶದಲ್ಲಿ ಸರ್ಕಾರವು ಶ್ರೀ ಕೆ.ಜಯಶಂಕರಮೂರ್ತಿ, ನಿವೃತ್ತ ಕಾರ್ಯದರ್ಶಿ(ಗ್ರೂಪ್–ಎ), ಕರ್ನಾಟಕ ವಿಧಾನ ಪರಿಷತ್, ಇವರನ್ನು ದಿನಾಂಕ: 04.06.2015 ರಿಂದ ಜಾರಿಗೆ ಬರುವಂತೆ ಮಹಿಳೆ ಮತ್ತು ಮಕ್ಕಳ ಮೇಲಿನ ಶೋಷಣೆ, ದೌರ್ಜನ್ಯ, ಅತ್ಯಾಚಾರ ನಿಯಂತ್ರಿಸುವ ಮತ್ತು ವರದಿ ನೀಡುವ ಸಮಿತಿಯ ಅಧ್ಯಕ್ಷರ ಆಪ್ತ ಕಾರ್ಯದರ್ಶಿ ಹುದ್ದೆಗೆ ಗುತ್ತಿಗೆ ಆಧಾರದ ಮೇರೆಗೆ ಕೆಸಿಎಸ್ಆರ್ ನಿಯಮ, 313 ರನ್ವಯ ಪುನರ್ ನೇಮಕ ಮಾಡಿ ಆದೇಶಿಸಿ ಇವರ ನೇಮಕಾತಿಗೆ ಸಂಬಂಧಿಸಿದಂತೆ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು ಎಂದು ತಿಳಿಸಲಾಗಿತ್ತು. ಆದರಂತೆ ಸದರಿಯವರ ವೇತನ, ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ಆರ್ಥಿಕ ಇಲಾಖೆ (ಸೇವೆಗಳು–3) ಆಇ 02 ಸೇ–3/16ರ ದಿನಾಂಕ:23.01.2016ರಲ್ಲಿ ಸಹಮತಿಸಿದ್ದು, ಸದರಿ ಸೇವಾ ಮತ್ತು ನಿಬಂಧನೆಗಳನ್ನು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 160 ಸಿಐಡಿ 2014 (ಪಿ–7), ಬೆಂಗಳೂರು, ದಿನಾಂಕ: 8ನೇ ಫೆಬ್ರವರಿ, 2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಮಹಿಳೆ ಮತ್ತು ಮಕ್ಕಳ ಮೇಲಿನ ಶೋಷಣೆ, ದೌರ್ಜನ್ಯ, ಅತ್ಯಾಚಾರ ನಿಯಂತ್ರಿಸುವ ಮತ್ತು ವರದಿ ನೀಡುವ ಸಮಿತಿಯ ಅಧ್ಯಕ್ಷರ ಆಪ್ತ ಕಾರ್ಯದರ್ಶಿ ಹುದ್ದೆಗೆ ಶ್ರೀ ಕೆ.ಜಯಶಂಕರಮೂರ್ತಿ ರವರ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸಲಾಗಿದೆ.

**ಸೇವಾ ಷರತ್ತು ಮತ್ತು ನಿಬಂಧನೆಗಳು ಈ ಕೆಳಕಂಡಂತಿವೆ:–**

1. ಶ್ರೀ ಕೆ.ಜಯಶಂಕರಮೂರ್ತಿ, ನಿವೃತ್ತ ಕಾರ್ಯದರ್ಶಿ(ಗ್ರೂಪ್–ಎ), ಕರ್ನಾಟಕ ವಿಧಾನ ಪರಿಷತ್, ಇವರ ಗುತ್ತಿಗೆ ನೇಮಕಾತಿ ಅವಧಿಯು ದಿನಾಂಕ: 04.06.2015 ರಿಂದ ಮಹಿಳೆ ಮತ್ತು ಮಕ್ಕಳ ಮೇಲಿನ ಶೋಷಣೆ, ದೌರ್ಜನ್ಯ ಅತ್ಯಾಚಾರ ನಿಯಂತ್ರಿಸುವ ಮತ್ತು ವರದಿ ನೀಡುವ ಸಮಿತಿಯ ಅಧ್ಯಕ್ಷರ ಅಧಿಕಾರವಧಿಯವರಿಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಶ್ರೀ ಕೆ.ಜಯಶಂಕರಮೂರ್ತಿ, ಇವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ₹.29,732/- ಮರುನೇಮಕಾತಿ ಪಡೆಯಲು ಅರ್ಹರಾಗಿರುತ್ತಾರೆ. ಈ ವೇತನದ ಜೊತೆಗೆ ಅವರು ಕಾಲ್ಪನಿಕ ವೇತನ ₹.63,600/- ಮೂಲ ವೇತನಕ್ಕೆ ಅನುಗುಣವಾಗಿ ಕಾಲಕಾಲಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ ಮತ್ತು ನಗರ ಪರಿಹಾರ ಭತ್ಯೆಯನ್ನು ಮಾತ್ರ ಪಡೆಯಲು ಅರ್ಹರಾಗಿರುತ್ತಾರೆ. ಆದರೆ, ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿ ಭತ್ಯೆ ಸೇರಿದಂತೆ ಯಾವುದೇ ಇತರೆ ಭತ್ಯೆಗಳು ಲಭ್ಯವಿರುವುದಿಲ್ಲ.
3. ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇ ಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂಧರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್. ನಿಯಮ 150ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.
5. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
6. ಸದರಿ ನೌಕರರು ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಭವಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
7. ಸದರಿ ಮರುನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.
8. ಅವರ ಕರ್ತವ್ಯ, ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.
9. ಅವರು ಕರ್ತವ್ಯಗಳನ್ನು ಪಾಲಿಸುತ್ತಿರುವ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
10. 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
11. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
12. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಉಂಟುಮಾಡಿದ್ದಲ್ಲಿ, ಅದನ್ನು ಸರ್ಕಾರಕ್ಕೆ ತುಂಬಿ ಕೊಡಲು ಅವರು ಹೊಣೆಯಾಗಿರುತ್ತಾರೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



13. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (₹.50.00) ರೂಪಾಯಿಗಳ ಮೌಲ್ಯದ ಛಾಪಾ ಕಾಗದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

PR. 180

**ಡಿ.ಸುಗುಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ.(ಅಪರಾಧಗಳು)

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಮಹೇಶ್ ಆರ್. ಕೊಠಾರಿ, ಮಾಲೀಕರು, ಕೊಠಾರಿ ಎಲೆಕ್ಟ್ರಾನಿಕ್ಸ್, ದಾವಣಗೆರೆ (ಟಿನ್–29460477290), ಇವರ ಪ್ರಕರಣದಲ್ಲಿ ಚಲನಚಿತ್ರ ಮಾರಾಟ/ಉಪಯೋಗಿಸುವ ಹಕ್ಕಿನ ವರ್ಗಾವಣೆಯ ವಹಿವಾಟಿನ ಮೇಲೆ 2005–06ರಿಂದ 2010–11ರ ಅವಧಿಗೆ ಸಂಬಂಧಿಸಿದಂತೆ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರ ಅಡಿಯಲ್ಲಿ ವಿಧಿಸಿರುವ ಬಡ್ಡಿಯನ್ನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ :**
1) ಶ್ರೀ ಮಹೇಶ್ ಆರ್. ಕೊಠಾರಿ, ಕೊಠಾರಿ ಎಲೆಕ್ಟ್ರಾನಿಕ್ಸ್, ದಾವಣಗೆರೆ, ಇವರ ಮನವಿ ದಿನಾಂಕ: 05/03/2015.
2) ಮಾನ್ಯ ಸಚಿವರು, ಮೂಲಸೌಲಭ್ಯ ಅಭಿವೃದ್ಧಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಹಾಗೂ ಹಜ್, ಇವರು ಮಾನ್ಯ ಮುಖ್ಯಮಂತ್ರಿಯವರಿಗೆ ಸಲ್ಲಿಸಿರುವ ನಡವಳಿ ದಿನಾಂಕ: 18/03/2015.
3) ವಾಣಿಜ್ಯ ತೆರಿಗೆಗಳ ಆಯುಕ್ತರ ಪತ್ರ ಸಂಖ್ಯೆ:ಕೆಎಸ್ಎ/ಸಿಆರ್–08/15–16, ದಿನಾಂಕ: 01/12/2015.

**ಪ್ರಸ್ತಾವನೆ:–**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ, ಶ್ರೀ ಮಹೇಶ್ ಆರ್, ಕೊಠಾರಿ, ಕೊಠಾರಿ ಎಲೆಕ್ಟ್ರಾನಿಕ್ಸ್, ದಾವಣಗೆರೆ ಇವರು ತಮಗೆ ಚಲನಚಿತ್ರ ಮಾರಾಟ/ಉಪಯೋಗಿಸುವ ಹಕ್ಕಿನ ವರ್ಗಾವಣೆಯ ವಹಿವಾಟಿನ ಮೇಲೆ 2005–06ರಿಂದ 2010–11ರ ಅವಧಿಗೆ ಸಂಬಂಧಿಸಿದಂತೆ ವಿಧಿಸಿರುವ ಮೌಲ್ಯವರ್ಧಿತ ತೆರಿಗೆಯನ್ನು ಮನ್ನಾ ಮಾಡುವಂತೆ ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ನಡವಳಿಯಲ್ಲಿ, ಮಾನ್ಯ ಸಚಿವರು, ಮೂಲಸೌಲಭ್ಯ ಅಭಿವೃದ್ಧಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಹಾಗೂ ಹಜ್, ಇವರು ಶ್ರೀ ಮಹೇಶ್ ಆರ್.ಕೊಠಾರಿ ಅವರ ಮನವಿಯನ್ನು ನಿಯಮಾನುಸಾರ ಪರಿಶೀಲಿಸಿ, ಅಗತ್ಯ ಕ್ರಮ ಕೈಗೊಳ್ಳುವಂತೆ ಮಾನ್ಯ ಮುಖ್ಯ ಮಂತ್ರಿಯವರನ್ನು ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ, ಶ್ರೀ ಮಹೇಶ್ ಆರ್. ಕೊಠಾರಿ, ಕೊಠಾರಿ ಎಲೆಕ್ಟ್ರಾನಿಕ್ಸ್, ದಾವಣಗೆರೆ, ಇವರು 2005–06ರಿಂದ 2010–11ರ ಅವಧಿಗೆ ಸಂಬಂಧಿಸಿದಂತೆ ₹. 1,70,89,359–00ಗಳ ತೆರಿಗೆ, ₹. 17,13,205–00ಗಳ ದಂಡ ಹಾಗೂ ₹. 1,71,62,059–00ಗಳ ಬಡ್ಡಿ ಸೇರಿ ಒಟ್ಟು ₹. 3,59,65,323–00ಗಳ ಬಾಕಿ ಮೊತ್ತದಲ್ಲಿ, 2005–06ನೇ ಸಾಲಿನ ಬಾಕಿಗೆ ಸಂಬಂಧಿಸಿದಂತೆ ₹. 47,695–00ಗಳ ತೆರಿಗೆಯನ್ನು ಮಾತ್ರ ಪಾವತಿಸಿದ್ದು, ಉಳಿದಂತೆ ₹. 1,70,41,664–00ಗಳ ತೆರಿಗೆ, ₹. 17,13,205–00ಗಳ ದಂಡ ಹಾಗೂ ₹. 1,71,62,759–00ಗಳ ಬಡ್ಡಿಯನ್ನು ಇನ್ನೂ ಪಾವತಿಸಬೇಕಾಗಿರುತ್ತದೆ ಎಂದು ವಾಣಿಜ್ಯ ತೆರಿಗೆಗಳ ಆಯುಕ್ತರು ತಿಳಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಶ್ರೀ ಮಹೇಶ್ ಆರ್. ಕೊಠಾರಿ, ಕೊಠಾರಿ ಎಲೆಕ್ಟ್ರಾನಿಕ್ಸ್, ದಾವಣಗೆರೆ, ಇವರ ಕೋರಿಕೆಯಂತೆ 2005–06ರಿಂದ 2010–11 ರ ಅವಧಿಗೆ ವಿಧಿಸಿರುವ ಮೌಲ್ಯವರ್ಧಿತ ತೆರಿಗೆಯನ್ನು ಹಾಗೂ ದಂಡವನ್ನು ಮನ್ನಾ ಮಾಡಲು ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರ ಅಡಿಯಲ್ಲಿ ಅವಕಾಶವಿರುವುದಿಲ್ಲ. ಆದರೆ, ಕಾಯ್ದೆಯ ಪ್ರಕರಣ 42(5)ರ ಅಡಿಯಲ್ಲಿ ಬಡ್ಡಿಯನ್ನು ಮನ್ನಾ ಮಾಡಲು ಅವಕಾಶವಿರುತ್ತದೆ. ಮುಂದುವರೆದು, ಸದರಿ ಕರದಾತರು ಪೂರ್ಣವಾಗಿ 2005–06ರಿಂದ 2010–11ರ ಅವಧಿಗೆ ವಿಧಿಸಲಾಗಿರುವ ತೆರಿಗೆ ಮತ್ತು ದಂಡವನ್ನು ಪಾವತಿಸದೇ ಇರುವುದರಿಂದ, ಈ ಅವಧಿಗಳಿಗೆ ಸಂಬಂಧಿಸಿದಂತೆ ಬಾಕಿ ಇರುವ ತೆರಿಗೆ ಮತ್ತು ದಂಡವನ್ನು ಪೂರ್ಣಾವಾಗಿ ಪಾವತಿಸುವ ಷರತ್ತಿಗೆ ಒಳಪಟ್ಟು, ಬಡ್ಡಿಯನ್ನು ಮಾತ್ರ ಮನ್ನಾ ಮಾಡಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಆಇ 103 ಸಿಎಸ್ಎಲ್ 2015, ಬೆಂಗಳೂರು, ದಿನಾಂಕ: 08/02/2016**.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಮಹೇಶ್ ಆರ್. ಕೊಠಾರಿ, ಕೊಠಾರಿ ಎಲೆಕ್ಟ್ರಾನಿಕ್ಸ್, ದಾವಣಗೆರೆ, ಇವರಿಗೆ 2005–06ರಿಂದ 2010–11ರ ಅವಧಿಗೆ ಮರುಕರನಿರ್ಧಾರಣೆ ಮೂಲಕ ವಿಧಿಸಲಾಗಿರುವ ₹. 1,70,41,664–00ಗಳ ಮೌಲ್ಯವರ್ಧಿತ ತೆರಿಗೆಯನ್ನು ಹಾಗೂ ₹. 17,13,205–00ಗಳ ದಂಡವನ್ನು ಪೂರ್ಣವಾಗಿ ಪಾವತಿಸುವ ಷರತ್ತಿಗೆ ಒಳಪಟ್ಟು, ಸದರಿ ಅವಧಿಗೆ ಮರುಕರನಿರ್ಧಾರಣೆಯಲ್ಲಿ ವಿಧಿಸಲಾಗಿರುವ **₹. 1,71,62,759–00 (₹. ಒಂದು ಕೋಟಿ ಎಪ್ಪತ್ತೊಂದು ಲಕ್ಷ ಅರವತ್ತೆರಡು ಸಾವಿರದ ಏಳುನೂರ ಐವತ್ತೊಂಭತ್ತು)**ಗಳ ಬಡ್ಡಿಯನ್ನು ಮಾತ್ರ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003ರ ಪ್ರಕರಣ 42(5)ರಂತೆ ಪೂರ್ಣವಾಗಿ ಮನ್ನಾ ಮಾಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

PR. 181

**ಕೆ.ಎಸ್.ಪದ್ಮಾವತಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ.(ವಾ.ತೆ–1)

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.